## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 345(448)

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಸ್.ವಿ.ಸಂಕನೂರ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 18-02-2022

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

<table>
<tr><th>ಕ್ರ. ಸಂ.</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>(ಅ)</td><td>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ ಗದಗ ಇದರ ವತಿಯಿಂದ MA, RDPR ಹಾಗೂ ಇತರ ಸ್ನಾತಕೋತ್ತರ ಕೋರ್ಸ್ ಗಳಲ್ಲಿ ಪದವಿ ಪಡೆದ ವಿದ್ಯಾರ್ಥಿಗಳಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನೇಮಕಾತಿಯಲ್ಲಿ ಮೀಸಲಾತಿ ನೀಡುವ ಕುರಿತು ಸೆಪ್ಟೆಂಬರ್-2021ರಲ್ಲಿ ಜರುಗಿದ ಅಧಿವೇಶನದಲ್ಲಿ ಸಮಿತಿ ರಚಿಸುವುದಾಗಿ ಭರವಸೆ ನೀಡಿದಂತೆ ಕ್ರಮವನ್ನು ಜರುಗಿಸಲಾಗಿದೆಯೇ; ಹಾಗಿದ್ದಲ್ಲಿ, ಸಮಿತಿಯಲ್ಲಿರುವ ಸದಸ್ಯರು ಯಾರು; (ಮಾಹಿತಿ ನೀಡುವುದು)</td><td>ಹೌದು<br>ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪಂರಾ 293 ಜಿಪಸ 2021, ದಿನಾಂಕ:04-10-2021ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.<br><br>1. ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ — ಅಧ್ಯಕ್ಷರು<br>2. ಆಯುಕ್ತರು, ಕರ್ನಾಟಕ ಪಂಚಾಯತ್ ರಾಜ್ ಆಯುಕ್ತಾಲಯ — ಸದಸ್ಯರು<br>3. ಆಯುಕ್ತರು, ಗ್ರಾಮೀಣಾಭಿವೃದ್ಧಿ — ಸದಸ್ಯರು<br>4. ವ್ಯವಸ್ಥಾಪಕ ನಿರ್ದೇಶಕರು, ರಾಜ್ಯ ಗ್ರಾಮೀಣ ಜೀವನೋಪಾಯ ಮಿಷನ್ — ಸದಸ್ಯರು<br>5. ಉಪಕುಲಪತಿಗಳು, ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ, ಗದಗ — ಸದಸ್ಯ<br>6. ನಿರ್ದೇಶಕರು(ಪಂ.ರಾಜ್-2), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ — ಸದಸ್ಯ ಕಾರ್ಯದರ್ಶಿ</td></tr>
</table>

| | | |
|---|---|---|
| (ಅ) | ಸರ್ಕಾರದ ಭರವಸೆಯಂತೆ ಸಮಿತಿಯನ್ನು ಯಾವಾಗ ರಚನೆ ಮಾಡಲಾಗಿದೆ; ಮತ್ತು ಸಮಿತಿಗೆ ವರದಿ ನೀಡಲು ನಿಗಧಿಪಡಿಸಿದ ಅವಧಿ ಎಷ್ಟು; (ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪಂರಾ 293 ಜಿಪಸ 2021, ದಿನಾಂಕ:04-10-2021ರಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.<br>ಉನ್ನತ ಮಟ್ಟದ ಸಮಿತಿಗೆ ವರದಿ ನೀಡಲು ಅವಧಿ ನಿಗಧಿಪಡಿಸಿರುವುದಿಲ್ಲ. |
| (ಇ) | ಈ ಸಮಿತಿಯು ಇಲ್ಲಿಯವರೆಗೆ ಎಷ್ಟು ಸಭೆಗಳನ್ನು ನಡೆಸಿದೆ; ಹಾಗೂ ಪ್ರಾಥಮಿಕ ವರದಿ ಸಲ್ಲಿಸಿದೆಯೇ? (ಮಾಹಿತಿ ನೀಡುವುದು) | ಸಮಿತಿಯು ದಿನಾಂಕ:17-02-2022ರಂದು ಸಭೆ ನಡೆಸಿ ಈ ಪದವಿಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವ ಬಗ್ಗೆ ಚರ್ಚಿಸಿರುತ್ತದೆ. |

**ಸಂಖ್ಯೆ: ಗ್ರಾಅಪಂರಾ 71 ಜಿಪಸ 2022**

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು